**ಟಿಪ್ಪಣಿ - ವಿಹಿತಾನ್ಯವಿಜಾನತಾ** ಇತ್ಯತ್ರ **ಅವಿಜಾನತಾ ವಿಹಿತಾನಿ** ಪಾಪಾನಿ ಲಘೂನಿ ।

**ಜಾನತಾ ತು ಕೃತಂ ಪಾಪಂ ಗುರು ಸರ್ವಂ ಭವತ್ಯುತ ।**
**ಅಜ್ಞಾನಾತ್ ಸ್ಖಲಿತೇ ದೋಷೇ ಪ್ರಾಯಶ್ಚಿತ್ತಂ ವಿಧಿಯತೇ ॥೪೪॥**

ಪಾಪಕರ್ಮವು ಒಂದೇ ಆಗಿದ್ದರೂ ಅದನ್ನು ತಿಳಿದು ಮಾಡಿದರೆ ದೊಡ್ಡಮಟ್ಟ-ದಲ್ಲಿ ಪಾಪವು ಬರುತ್ತದೆ. ತಿಳಿಯದೇ ಮಾಡಿದರೆ ಅದೇ ಕರ್ಮವು ಸ್ವಲ್ಪವೇ ಪಾಪವನ್ನು ನೀಡುತ್ತದೆ. ಇದನ್ನು ಹೇಗೆ ಅವನಿಂದ ಪಾಪಕಾರ್ಯವು ನಡೆದಿದೆ ಎಂಬುದನ್ನು ವಿಚಾರ ಮಾಡಿ, ಪ್ರಾಯಶ್ಚಿತ್ತವನ್ನು ಶಾಸ್ತ್ರಗಳಲ್ಲಿ ವಿಧಾನ ಮಾಡ-ಲಾಗಿದೆ.

**ಶಕ್ಯತೇ ವಿಧಿನಾ ಪಾಪಂ ಯಥೋಕ್ತೇನ ವ್ಯಪೋಹಿತುಮ್ ।**
**ಆಸ್ತಿಕೇ ಶ್ರದ್ದಧಾನೇ ತು ವಿಧಿರೇಷ ವಿಧೀಯತೇ ॥೪೫॥**

ಧರ್ಮಶಾಸ್ತ್ರಗಳಲ್ಲಿ ವಿಧಾನ ಮಾಡಲ್ಪಟ್ಟ ಪ್ರಾಯಶ್ಚಿತ್ತಗಳ ಆಚರಣೆಯಿಂದ ಪಾಪಗಳನ್ನು ಖಂಡಿತವಾಗಲೂ ಪರಿಹಾರ ಮಾಡಿಕೊಳ್ಳಲು ಸಾಧ್ಯವಿದೆ. ಭಗವಂತ-ನನ್ನು ನಂಬಬೇಕು. ನಾನು ಪರಿಶುದ್ಧನಾಗಬೇಕೆಂಬ ದೀಕ್ಷೆಯಿರಬೇಕು. ಧರ್ಮದಲ್ಲಿ ಶ್ರದ್ಧೆಯಿರಬೇಕು. ಅಂಥವನಿಗಷ್ಟೇ ಶಾಸ್ತ್ರವು ಪ್ರಾಯಶ್ಚಿತ್ತವನ್ನು ವಿಧಾನ ಮಾಡುತ್ತದೆ.

**ನಾಸ್ತಿಕಾಶ್ರದ್ದಧಾನೇಷು ಪುರುಷೇಷು ಕದಾಚನ ।**
**ದಂಭದೋಷಪ್ರಧಾನೇಷು ವಿಧಿರೇಷ ನ ದೃಶ್ಯತೇ ॥೪೬॥**

ನಾಸ್ತಿಕರಾದವರಿಗೆ, ಶ್ರದ್ಧೆಯಿಲ್ಲದವರಿಗೆ, ಅಹಂಕಾರವುಳ್ಳವರಿಗೆ, ಕೆಟ್ಟಕೆಲಸದಲ್ಲಿ ನಿರತರಾದವರಿಗೆ ಈ ಪ್ರಾಯಶ್ಚಿತ್ತವನ್ನು ಯಾವುದೇ ಶಾಸ್ತ್ರಗಳು ಸರ್ವಥಾ ಹೇಳು-ವುದಿಲ್ಲ.

**ಶಿಷ್ಟಾಚಾರಶ್ಚ ಶಿಷ್ಟಶ್ಚ ಧರ್ಮೋ ಧರ್ಮಭೃತಾಂ ವರ ।**
**ಸೇವಿತವ್ಯೋ ನರವ್ಯಾಘ್ರ ಪ್ರೇತ್ಯ ಚೇಹ ಸುಖಾರ್ಥಿನಾ ॥೪೭॥**

ಶ್ರೇಷ್ಠನಾದ ಪುರುಷಶ್ರೇಷ್ಠನೇ! ಇಹಲೋಕದಲ್ಲಿ ಮತ್ತು ಪರಲೋಕದಲ್ಲಿ ಯಾರು ಸುಖವನ್ನು ಇಚ್ಛಿಸುತ್ತಾನೋ, ಅಂಥವನು ಶಿಷ್ಟಾಚಾರಸಂಪ್ರದಾಯವನ್ನು ಅನುಸರಿಸಲೇ ಬೇಕು. ವೇದಗಳಲ್ಲಿ ಹೇಳಲ್ಪಟ್ಟ ಧರ್ಮವನ್ನು ಶ್ರದ್ಧೆಯಿಂದ ಅನುಷ್ಠಾನ ಮಾಡಬೇಕು.

**ಸ ರಾಜನ್ ಮೋಕ್ಷ್ಯಸೇ ಪಾಪಾತ್ ತೇನ ಪೂರ್ವೇಣ ಹೇತುನಾ ।**
**ತ್ರಾಣಾರ್ಥಂ ವಾ ವಧೇನ್ನೈಷಾಮಥ ವಾ ನೃಪಕರ್ಮಣಾ ॥೪೮॥**

ಧರ್ಮರಾಜನೇ ! ನೀನು ಶಿಷ್ಟಾಚಾರವನ್ನು ಅನುಸರಿಸುತ್ತಿರುವಿ. ಧರ್ಮ-ಮಾರ್ಗದಲ್ಲಿರುವಿ. ನೀನು ಮಾಡಿದ ಅಲ್ಪವಾದ ಪಾಪದಿಂದ ಖಂಡಿತವಾಗಿಯೂ ವಿಮುಕ್ತನಾಗುವಿ. ಪ್ರಾಣರಕ್ಷಣೆಗೋಸ್ಕರ ರಾಜ್ಯವನ್ನು ಪರಿತ್ಯಾಗ ಮಾಡಬೇಕೆಂಬ ನಿಶ್ಚಯವನ್ನು ಬಿಟ್ಟುಬಿಡು. ಪ್ರಾಯಶ್ಚಿತ್ತವನ್ನು ಮಾಡಿಕೋ. ದಾನ ಮಾಡುವುದರಿಂದ ಧರ್ಮದಿಂದ ಪರಿಪಾಲನೆ ಮಾಡುವಿಕೆಯಿಂದ ಕ್ಷತ್ರಿಯಧರ್ಮದ ಅನುಷ್ಠಾನ-ದಿಂದಲೂ ನೀನು ಪಾಪಗಳಿಂದಲೂ ವಿಮುಕ್ತನಾಗುವಿ.

**ಅಥವಾ ತೇ ಘೃಣಾ ಕಾಚಿತ್ ಪ್ರಾಯಶ್ಚಿತ್ತಂ ಚರಿಷ್ಯಸಿ ।**
**ಮಾ ತ್ವೇವಾನಾರ್ಯಜುಷ್ಟೇನ ಕರ್ಮಣಾ ನಿಧನಂ ಗಮಃ ॥೪೯॥**

ಒಂದುವೇಳೆ ಯುದ್ಧವೆಂಬ ಘಟನೆಯಿಂದ ನಿನ್ನ ಮನಸ್ಸಿನಲ್ಲಿ ಅನುಕಂಪವು ಉಂಟಾಗಿದ್ದರೆ, ಅಕಾರ್ಯವನ್ನು ಎಸಗಿಬಿಟ್ಟೆ, ಪಶ್ಚಾತ್ತಾಪವುಂಟಾಗಿದ್ದರೆ, ಪ್ರಾಯಶ್ಚಿತ್ತವನ್ನು ಆಚರಿಸು. ಇದನ್ನು ಬಿಟ್ಟು, ಸಂಪ್ರದಾಯವನ್ನು ಅನುಸರಿಸದ ಅನಾರ್ಯರು ತೆರಳುವ ಮಾರ್ಗದಲ್ಲಿ ತೆರಳಬೇಡ. ದೈನ್ಯಾವಸ್ಥೆಯನ್ನು ಹೊಂದ-ಬೇಡ. ಆತ್ಮವಿನಾಶವನ್ನು ಮಾಡಿಕೊಳ್ಳಬೇಡ.

**ಏವಮುಕ್ತೋ ಭಗವತಾ ಧರ್ಮರಾಜೋ ಯುಧಿಷ್ಠಿರಃ ।**
**ಚಿಂತಯಿತ್ವಾ ಮುಹೂರ್ತಂ ತು ಪ್ರತ್ಯುವಾಚ ತಪೋಧನಮ್ ॥೫೦॥**

ವೈಶಂಪಾಯನರು – ಜನಮೇಜಯನೇ! ಶ್ರೀವೇದವ್ಯಾಸದೇವರು ಹೀಗೆ ಯುಧಿ-ಷ್ಠಿರನಿಗೆ ಅನೇಕ ಬಗೆಯಲ್ಲಿ ಸಮಾಧಾನವನ್ನು ಮಾಡಿದರು. ಆ ಯುಧಿಷ್ಠಿರನು

ಒಂದು ಮುಹೂರ್ತಗಳ ಕಾಲ ಆತ್ಮವಿಮರ್ಶೆಯನ್ನು ಮಾಡಿಕೊಳ್ಳುತ್ತಾ, ತಪೋ-ಧನರಾದ ಶ್ರೀವೇದವ್ಯಾಸದೇವರನ್ನು ಪುನಃ ಹೀಗೆ ವಿನಮ್ರನಾಗಿ ಪ್ರಶ್ನಿಸಿದನು.

॥ ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ಶಾಂತಿಪರ್ವಣಿ ರಾಜಧರ್ಮೇ ಪ್ರಾಯಶ್ಚಿತ್ತೀಯೇ ಷಟ್‌ತ್ರಿಂಶೋಽಧ್ಯಾಯಃ ॥೩೬॥

ಇಲ್ಲಿಗೆ ಮಹಾಭಾರತದ ಶಾಂತಿಪರ್ವದಲ್ಲಿ ಮೂವತ್ತಾರನೆಯ ಅಧ್ಯಾಯವು ಮುಗಿಯಿತು.

* * * * *

\- - - - -

॥ಶ್ರೀಮಧ್ವೇಶಾರ್ಪಣಮಸ್ತು॥

ಗೋಬ್ರಾಹ್ಮಣಾರ್ಥೇ ವ್ಯಸನೇ ಚ ರಾಜ್ಞಾಂ
ರಾಷ್ಟ್ರೋಪಮರ್ದೇ ಸ್ವಶರೀರಹೇತೋಃ ।
ಸ್ತ್ರೀಣಾಂ ಚ ವಿಕ್ರುಷ್ಟರುತಾನಿ ಶ್ರುತ್ವಾ
ವಿಪ್ರೋಽಪಿ ಯುಧ್ಯೇತ ಮಹಾಪ್ರಭಾವಃ ॥

ಗೋಬ್ರಾಹ್ಮಣರಿಗೆ ಸಂಕಟಸ್ಥಿಸಿ ಪ್ರಾಪ್ತವಾದಾಗ, ರಾಜರುಗಳು ರಾಷ್ಟ್ರಕ್ಕೆದ್ರೋಹವೆಸಗುವಾಗ, ತನ್ನ ಶರೀರವನ್ನು ಕಾಪಾಡಿಕೊಳ್ಳುವ ಸಂದರ್ಭ ಒದಗಿದಾಗ, ಸ್ತ್ರೀಯರ ಆಕ್ರಂದನವನ್ನು ಕೇಳಿದಾಗ ಬ್ರಾಹ್ಮಣನೂ ಕೂಡಾ ಯುದ್ಧಕ್ಕೆ ಸಿದ್ಧನಾಗಬೇಕು.

ISBN: 978-93-88813-28-0